# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1512(1832)
ಮಾನ್ಯ ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ(ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 22.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಅನುದಾನಿತ ಪ್ರಾಥಮಿಕ, ಪ್ರೌಢ ಹಾಗೂ ಪದವಿ ಪೂರ್ವ ಶಾಲಾ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳಿಗೆ ನೀಡಲಾಗುತ್ತಿರುವ ಸೇವಾ ಸೌಲಭ್ಯಗಳೇನು;(ವಿವರಗಳನ್ನು ಒದಗಿಸುವುದು) | ಅನುದಾನಿತ ಪ್ರಾಥಮಿಕ, ಪ್ರೌಢಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಬೋಧಕ/ಬೋಧಕೇತರರ ನೌಕರರಿಗೆ ಕರ್ನಾಟಕ ಶಿಕ್ಷಣ ಕಾಯ್ದೆಯನ್ವಯ ಸೇವಾ ಸೌಲಭ್ಯಗಳನ್ನು ಈ ಕೆಳಕಂಡಂತೆ ನೀಡಲಾಗುತ್ತಿದೆ.<br>1. ರಾಜ್ಯ ಸರ್ಕಾರಿ ನೌಕರರುಗಳಿಗೆ ವೇತನ ಆಯೋಗವು ಕಾಲಕಾಲಕ್ಕೆ ಪರಿಷ್ಕರಿಸಿ ನೀಡುವ ವೇತನ ಸೌಲಭ್ಯವನ್ನು ಅನುದಾನಿತ ಬೋಧಕ/ಬೋಧಕೇತರರ ನೌಕರರಿಗೆ ನೀಡಲಾಗುತ್ತಿದೆ.<br>2. ಕಾಲ ಕಾಲಕ್ಕೆ ಸರ್ಕಾರಿ ನೌಕರರುಗಳಿಗೆ ನೀಡಲಾಗುವ ತುಟ್ಟಿಭತ್ಯೆ ಸೌಲಭ್ಯವನ್ನು ಅನುದಾನಿತ ಶಾಲಾ ನೌಕರರುಗಳಿಗೂ ನೀಡಲಾಗುತ್ತಿದೆ.<br>3. ವಾರ್ಷಿಕ ಬಡ್ತಿ ಸೌಲಭ್ಯವನ್ನು ನೀಡಲಾಗುತ್ತಿದೆ. ಹಾಗೂ ಮನೆ ಬಾಡಿಗೆ ಭತ್ಯೆ ನೀಡಲಾಗುತ್ತಿದೆ.<br>4. ದಿನಾಂಕ:01.04.2006ರ ಪೂರ್ವದಲ್ಲಿ ನೇಮಕಗೊಂಡ ಅನುದಾನಿತ ಶಾಲಾ ಸಿಬ್ಬಂದಿಗಳಿಗೆ ಹಳೆ ಪಿಂಚಣಿ ಸೌಲಭ್ಯವನ್ನು ನೀಡಲಾಗುತ್ತಿದೆ.<br>5. ಬೋಧಕ ಬೋಧಕೇತರ ನೌಕರರಿಗೆE ರಜೆ/ನಗಧೀಕರಣ ಸೌಲಭ್ಯವನ್ನು ಸಹ ನೀಡಲಾಗುತ್ತಿದೆ.<br>6. ಸರ್ಕಾರಿ ನೌಕರರಿಗೆ ನೀಡುವಂತೆ 10 ವರ್ಷದ ಕಾಲಮಿತಿ ಬಡ್ತಿ,ತ 15 ವರ್ಷದ ಸ್ವಯಂಚಾಲಿತ ಬಡ್ತಿ, 20/25/30ವರ್ಷಗಳ ಹೆಚ್ಚುವರಿ ವೇತನ ಬಡ್ತಿಯನ್ನು ನೀಡಲಾಗುತ್ತಿದೆ.<br>7. ಶಿಕ್ಷಣ ಕಾಯಿದೆ ಹಾಗೂ ಮೀಸಲಾತಿ ನಿಯಮಗಳನ್ವಯ ಅರ್ಹ ಶಿಕ್ಷಕರಿಗೆ ಮುಖ್ಯ ಶಿಕ್ಷಕರಾಗಿ ಹಾಗೂ ಡಿ-ಗ್ರೂಪ್ ನೌಕರರಿಗೆ ದ್ವಿತೀಯ ದರ್ಜೆ ಸಹಾಯಕರಾಗಿ ಬಡ್ತಿ ನೀಡಲಾಗುತ್ತಿದೆ. |

| | | |
|---|---|---|
| ಆ | ಈ ಸಿಬ್ಬಂದಿ ವರ್ಗದವರನ್ನು ಎನ್.ಪಿ.ಎಸ್., ಯೋಜನೆಯಡಿ ತರುವ ಕುರಿತು ಸರ್ಕಾರದ ನಿಲುವೇನು; | ಸರ್ಕಾರದ ಆದೇಶ ಸಂಖ್ಯೆ:ಎಫ್ ಡಿ (ಎಸ್ ಪಿ ಎಲ್)04 ಪಿಇಟಿ 2005 ದಿ:31.03.2006ರ ಹೊಸ ಪಿಂಚಣಿ ಸೌಲಭ್ಯ ಆದೇಶದ ಕಂಡಿಕೆ-8ರ ಪ್ರಕಾರ ಆಡಳಿತ ಮಂಡಳಿಯಿಂದಲೇ ಭರಿಸಬೇಕಾಗಿದ್ದು, ಈ ಆದೇಶವನ್ನು ಪಾಲನೆ ಮಾಡುವಂತೆ ಅನುದಾನ ಸಹಿತ ನೇಮಕಾತಿ ಆದೇಶದಲ್ಲಿ ಷರತ್ತು ವಿಧಿಸಿ ಅನುಮೋದಿಸಲಾಗುತ್ತಿದೆ. |
| ಇ | ಈ ಪ್ರಕ್ರಿಯೆಯು ಯಾವ ಹಂತದಲ್ಲಿದೆ; ಇದರಡಿ ತರುವ ಕುರಿತು ಇರುವ ಕಾನೂನು ತೊಡಕುಗಳೇನು; ಈ ತೊಡಕುಗಳ ನಿವಾರಣೆಗೆ ಸರ್ಕಾರದ ಕ್ರಮವೇನು; | |
| ಈ | ಈ ಸಿಬ್ಬಂದಿಗಳಿಗೆ ಎನ್.ಪಿ.ಎಸ್., ಯೋಜನೆಯನ್ನು ವಿಸ್ತರಿಸಿದಲ್ಲಿ ತಗಲಬಹುದಾದ ಒಟ್ಟು ವೆಚ್ಚ ಎಷ್ಟು? | |

ಇಪಿ 139 ಎಸ್ಇಎಸ್ 2021

S. S.

**(ಎಸ್ ಸುರೇಶ್ ಕುಮಾರ್)**
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು